ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 22ನೇ ಸೆಪ್ಟಂಬರ್, 2020

ಸಹಕಾರ ಸಂಘಗಳ ಮತ್ತು ಸಿಬ್ಬಂದಿ ನೇಮಕಾತಿಯ ಮಾಹಿತಿ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು) -

28 (208) ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿರುವ ಸಹಕಾರಿ ಸಂಘಗಳ ಸಂಖ್ಯೆ ಎಷ್ಟು ; ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು ; (ಜಿಲ್ಲಾವಾರು ಮಾಹಿತಿಯನ್ನು ನೀಡುವುದು)

(ಆ) ಸಹಕಾರಿ ಸಂಘದ ಸಿಬ್ಬಂದಿ ನೇಮಕಾತಿಯ ನಿಯಮಗಳು ಯಾವುವು ; ಸರ್ಕಾರದ ಆದೇಶ, ಸಂಘದ ಬೈಲಾದ ಮೂಲಕ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಹೊರರಾಜ್ಯದ ಅಭ್ಯರ್ಥಿಗಳನ್ನು ನೇಮಕಾತಿ ಮಾಡಲು ಅವಕಾಶ, ನೀಡಲಾಗಿದೆಯೇ ; ನೀಡಿದ್ದಲ್ಲಿ, ಆದೇಶದ ಪ್ರತಿಯನ್ನು ಒದಗಿಸುವುದು ;

(ಇ) ಕಳೆದ 3 ವರ್ಷಗಳಲ್ಲಿ ಸಿಬ್ಬಂದಿ ನೇಮಕಾತಿ ಮಾಡಿಕೊಂಡ ಸಹಕಾರಿ ಸಂಘಗಳ ಸಂಖ್ಯೆ ಎಷ್ಟು ; ನೇಮಕಾತಿ ಮಾಡಿಕೊಂಡ ಸಿಬ್ಬಂದಿಗಳ ಸಂಖ್ಯೆ ಎಷ್ಟು ; ಇವುಗಳಲ್ಲಿ ಸಾಮಾನ್ಯ ವರ್ಗದವರಿಗೆ, ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ, ಪ್ರವರ್ಗ1, 2ಎ, 2ಬಿ. 3ಎ, 3ಬಿ, ಮಹಿಳೆ, ಮಾಜಿ ಸೈನಿಕರು ಹಾಗೂ ಅಂಗವಿಕಲರಿಗೆ ಮೀಸಲಿರಿಸಿದ ಸ್ಥಾನಗಳು ಎಷ್ಟು ; (ಸಹಕಾರಿ ಸಂಸ್ಥೆವಾರು ಮಾಹಿತಿಯನ್ನು ಒದಗಿಸುವುದು)

(ಈ) ಸಹಕಾರಿ ಸಂಘಗಳ ಸಿಬ್ಬಂದಿ ನೇರ ನೇಮಕಾತಿ ಪ್ರಕಟಣೆಯಲ್ಲಿ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ 1, 2ಎ, 2ಬಿ, 3ಎ, 3ಬಿ ಮಹಿಳೆ, ಮಾಜಿ ಸೈನಿಕರು ಹಾಗೂ ಅಂಗವಿಕಲರಿಗೆ ಮೀಸಲಿರಿಸಿದ ಸ್ಥಾನಗಳನ್ನು ನೇಮಕಾತಿ ಸಂದರ್ಭದಲ್ಲಿ ಸಾಮಾನ್ಯ ವರ್ಗ ಹಾಗೂ ಇತರೆ ಪ್ರವರ್ಗದವರಿಗೆ ಪರಿವರ್ತಿಸಿ ನೀಡಿದ ಪ್ರಕರಣಗಳ ಸಂಖ್ಯೆ ಎಷ್ಟು ; (ಸಹಕಾರಿ ಸಂಘವಾರು ಮಾಹಿತಿಯನ್ನು ನೀಡುವುದು)

(ಉ) ಕಾನೂನು ಬಾಹಿರವಾಗಿ ಮತ್ತು ಕಾಯಿದೆಗೆ ವಿರುದ್ಧವಾಗಿ ಈ ರೀತಿ ಮೀಸಲಾತಿ ಪರಿವರ್ತನೆ ಮಾಡಿರುವ ನೇಮಕಾತಿಗೆ ಸರ್ಕಾರದಿಂದ ಅನುಮತಿ ನೀಡಿರುವ ಪ್ರಕರಣಗಳ ಸಂಖ್ಯೆ ಎಷ್ಟು ; ಈ ರೀತಿ ಪರಿವರ್ತನೆಗೆ ಅವಕಾಶ ಮಾಡಿ ಕೊಟ್ಟ ಅಧಿಕಾರಿಯವರ ಮೇಲೆ ಶಿಸ್ತು ಕ್ರಮವಹಿಸಲಾಗಿದೆಯೇ ; ಇಲ್ಲವಾದಲ್ಲಿ ಕಾರಣವೇನು ? (ಪ್ರಕರಣವಾರು ಮಾಹಿತಿ ನೀಡುವುದು)